

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 557 (603+604)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಕೊಳಚೆ ಮಂಡಳಿಯ ವತಿಯಿಂದ ಸ್ವಾಧೀನ ಪತ್ರ ನೀಡಿರುವ ಕುರಿತು

(ಅ) ಬೆಂಗಳೂರು ದಕ್ಷಿಣ ತಾಲ್ಲೂಕು, ಕೃಷ್ಣರಾಜಪುರ ಹೋಬಳಿ, ಕೃಷ್ಣರಾಜಪುರ ಗ್ರಾಮದ ಸರ್ವೆ ನಂ.58ರ ಸರ್ಕಾರಿ ಕೆರೆಯ ಪ್ರಸ್ತುತ ವಿಸ್ತೀರ್ಣವೆಷ್ಟು; 1991ಕ್ಕಿಂತ ಮುಂಚೆ ಇದ್ದ ಕೆರೆಯ ವಿಸ್ತೀರ್ಣವೆಷ್ಟು; ಈ ಕೆರೆಯು ಯಾವ ಇಲಾಖೆಯ ಅಧೀನಕ್ಕೆ ಬರುತ್ತದೆ;

(ಆ) ಸದರಿ ಸರ್ಕಾರಿ ಕೆರೆಯನ್ನು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಒತ್ತುವರಿಯಾದ ಜಾಗದ ವಿಸ್ತೀರ್ಣವೆಷ್ಟು;

(ಇ) ಕಂದಾಯ ಇಲಾಖೆಯ ಜಮೀನಿಗೆ ಕೊಳಚೆ ನಿರ್ಮೂಲನಾ ಮಂಡಳಿಯವರು ಯಾವ ನಿಯಮದ ಪ್ರಕಾರ ಸ್ವಾಧೀನ ಪತ್ರವನ್ನು ನೀಡಬಹುದು; ಇದನ್ನು ಯಾವ ಕಾನೂನಿನ ಅಡಿಯಲ್ಲಿ ಅಧಿಕೃತವೆಂದು ಪರಿಗಣಿಸಲಾಗಿದೆ;

(ಈ) ನಿಯಮ ಬಾಹಿರವಾಗಿ ಕೊಳಚೆ ನಿರ್ಮೂಲನಾ ಮಂಡಳಿಯ ಅಧಿಕಾರಿಗಳು ತಮ್ಮದಲ್ಲದ ಇಲಾಖೆಯ ವ್ಯಾಪ್ತಿಗೆ ಬರದಿರುವ ಜಾಗಕ್ಕೆ ಸ್ವಾಧೀನ ಪತ್ರ ನೀಡಿರುವುದಾದರೆ ಅಂತಹ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗಿದೆಯೇ; ಇಲ್ಲವಾದಲ್ಲಿ ಯಾವ ಕಾಲಮಿತಿಯೊಳಗೆ ಪ್ರಕರಣ ದಾಖಲಿಸಲಾಗುವುದು?